## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 314
2. ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ
3. ಉತ್ತರಿಸಬೇಕಾದ ದಿನಾಂಕ : 14.09.2021
4. ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಜಿಲ್ಲೆಯ ಕಬ್ಬು ಬೆಳೆಗಾರರು ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡಿ ವರ್ಷ ಗತಿಸಿದರೂ ಕಾರ್ಖಾನೆಗಳು ರೈತರಿಗೆ ಹಣ ಪಾವತಿಸಿಲ್ಲದ ಕಾರಣ ರೈತರು ಕಂಗಾಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೀದರ್ ಜಿಲ್ಲೆಯಲ್ಲಿ 2020-21ನೇ ಸಾಲಿನಲ್ಲಿ ಸಹಕಾರಿ ವಲಯದ 2 ಹಾಗೂ ಖಾಸಗಿ ವಲಯದ 2 ಹೀಗೆ ಒಟ್ಟು 4 ಸಕ್ಕರೆ ಕಾರ್ಖಾನೆಗಳು ಕಾರ್ಯ ನಿರ್ವಹಿಸಿರುತ್ತವೆ. ಈ ಕಾರ್ಖಾನೆಗಳಿಗೆ ಪ್ರತಿ ಟನ್ ಒಂದಕ್ಕೆ ರೂ.2708/-ಗಳನ್ನು ಎಫ್.ಆರ್.ಪಿ. ದರವನ್ನಾಗಿ ನಿಗದಿಪಡಿಸಿದ್ದು, ಸದರಿ 04 ಕಾರ್ಖಾನೆಗಳ ಪೈಕಿ ಬೀದರ್ ಜಿಲ್ಲೆಯ 03 ಸಕ್ಕರೆ ಕಾರ್ಖಾನೆಗಳು ಸರ್ಕಾರವು ನಿಗದಿಪಡಿಸಿರುವ ಎಫ್.ಆರ್.ಪಿ. ದರದಂತೆ ಕಬ್ಬು ಬಿಲ್ಲು ಮೊತ್ತವನ್ನು ಪೂರ್ಣವಾಗಿ ಪಾವತಿಸಿರುತ್ತವೆ.<br><br>ಬೀದರ್ ಕಿಸಾನ್ ಶಕ್ಕರ್ ಕಾರ್ಖಾನಾ ಲಿ. ಮೊಗದಾಳ್, ಬೀದರ್ ತಾಲ್ಲೂಕು ಮತ್ತು ಜಿಲ್ಲೆ ಈ ಕಾರ್ಖಾನೆಯು 2020-21ನೇ ಹಂಗಾಮಿನಲ್ಲಿ ದಿನಾಂಕ 31.08.2021ಕ್ಕೆ ಇದ್ದಂತೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಪಾವತಿಸಬೇಕಾದ ಕಬ್ಬು ಬಿಲ್ಲು ಮೊತ್ತ ರೂ.6012.00 ಲಕ್ಷಗಳು. ಈ ಪೈಕಿ ರೂ.5803.00 ಲಕ್ಷಗಳನ್ನು ಪಾವತಿಸಿದ್ದು, ಬಾಕಿ ಮೊತ್ತ ರೂ.209.00 ಲಕ್ಷಗಳಷ್ಟು ಇರುತ್ತದೆ. ಕಬ್ಬು ಬಿಲ್ಲು ಪಾವತಿ ಪ್ರಮಾಣವು ಶೇ.97 ರಷ್ಟು ಆಗಿರುತ್ತದೆ. |
| (ಆ) | ಬಂದಿದ್ದಲ್ಲಿ ಎಷ್ಟು ರೈತರು ಕಾರ್ಖಾನೆಗಳಿಗೆ ಎಷ್ಟು ಟನ್ ಕಬ್ಬು ಸರಬರಾಜು ಮಾಡಿದ್ದಾರೆ; (ಕಾರ್ಖಾನೆವಾರು ವಿವರವಾದ ಮಾಹಿತಿ ಒದಗಿಸುವುದು) | ಬೀದರ್ ಜಿಲ್ಲೆಯ 04 ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡಿರುವ ರೈತರ ಸಂಖ್ಯೆ ಮತ್ತು ಸರಬರಾಜಾದ ಕಬ್ಬಿನ ಪ್ರಮಾಣದ ವಿವರಗಳು ಕಾರ್ಖಾನೆವಾರು ಈ ಕೆಳಕಂಡಂತಿದೆ. |

| ಕ್ರ. ಸಂ. | ಕಾರ್ಖಾನೆಯ ಹೆಸರು | ಕಬ್ಬು ಸರಬರಾಜು ಮಾಡಿದ ರೈತರ ಸಂಖ್ಯೆ | ಕಬ್ಬು ಸರಬರಾಜು ಮಾಡಿದ ಪ್ರಮಾಣ (ಮೆ:ಟನ್‌ಗಳಲ್ಲಿ) |
|---|---|---|---|
| 1 | ಭಾಲ್ಕೇಶ್ವರ ಶುಗರ್ಸ್ ಲಿ., ಬಾಜೋಳಗ, ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ | 4051 | 421681 |
| 2 | ಬೀದರ್ ಕಿಸಾನ್ ಶಕ್ಕರ್ ಕಾರ್ಖಾನಾ ಲಿ., ಮೊಗ್ದಾಲ್ ಗ್ರಾಮ, ಬೀದರ್ ತಾಲ್ಲೂಕು ಮತ್ತು ಜಿಲ್ಲೆ | 3630 | 222020 |
| 3 | ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಭಾಲ್ಕಿ ತಾಲ್ಲೂಕು ಬೀದರ್ ಜಿಲ್ಲೆ. | 3859 | 323233 |
| 4 | ನಾರಂಜಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ, ಇಮಾಂಪುರ, ಬೀದರ್ ಜಿಲ್ಲೆ | 3671 | 252741 |

| | | |
|---|---|---|
| (ಇ) | ರೈತರು ಕಬ್ಬು ಸರಬರಾಜು ಮಾಡಿದ್ದರೂ ಕಾರ್ಖಾನೆಗಳು ಬಿಲ್ಲು ಪಾವತಿಸದಿರುವುದಕ್ಕೆ ಕಾರಣವೇನು; ಕಾರ್ಖಾನೆಗಳು ಸರ್ಕಾರದ ಹತೋಟಿಯಲ್ಲಿವೆಯೇ; | ಬೀದರ್ ಜಿಲ್ಲೆಯ 04 ಸಕ್ಕರೆ ಕಾರ್ಖಾನೆಗಳ ಪೈಕಿ 03 ಸಕ್ಕರೆ ಕಾರ್ಖಾನೆಗಳು ಸರ್ಕಾರವು ನಿಗದಿಪಡಿಸಿರುವ ಎಫ್.ಆರ್.ಪಿ. ದರದಂತೆ ಕಬ್ಬು ಬಿಲ್ಲು ಮೊತ್ತವನ್ನು ಪೂರ್ಣವಾಗಿ ತೀರುವಳಿ ಮಾಡಿರುತ್ತಾರೆ. ಬೀದರ್ ಕಿಸಾನ್ ಶಕ್ಕರ್ ಕಾರ್ಖಾನಾ ಲಿ. ಮೊಗದಾಳ್, ಬೀದರ್ ತಾಲ್ಲೂಕು ಮತ್ತು ಜಿಲ್ಲೆ ಈ ಕಾರ್ಖಾನೆಯು 2020-21ನೇ ಹಂಗಾಮಿನಲ್ಲಿ ದಿನಾಂಕ 31.08.2021ಕ್ಕೆ ಇದ್ದಂತೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಪಾವತಿಸಬೇಕಾದ ಕಬ್ಬು ಬಿಲ್ಲು ಮೊತ್ತ ರೂ.6012.00 ಲಕ್ಷಗಳು. ಈ ಪೈಕಿ ರೂ.5803.00 ಲಕ್ಷಗಳನ್ನು ಪಾವತಿಸಿದ್ದು, ಬಾಕಿ ಮೊತ್ತ ರೂ.209.00 ಲಕ್ಷಗಳಷ್ಟು ಇರುತ್ತದೆ. ಕಬ್ಬು ಬಿಲ್ಲು ಪಾವತಿ ಪ್ರಮಾಣವು ಶೇ.97 ರಷ್ಟು ಆಗಿರುತ್ತದೆ. ಬಾಕಿ ಪಾವತಿಸುವಂತೆ ಸೂಚಿಸಿ ಕಾರ್ಖಾನೆಗೆ ಶಾಸನಬದ್ಧ ನೋಟೀಸುಗಳನ್ನು ಜಾರಿಗೊಳಿಸಲಾಗಿದೆ.<br><br>ರಾಜ್ಯ ಸರ್ಕಾರವು ಕಬ್ಬು (ನಿಯಂತ್ರಣ) ಆದೇಶ, 1966 ಮತ್ತು ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ, 2013 ಹಾಗೂ ತಿದ್ದುಪಡಿ ಅಧಿನಿಯಮ 2014 ರನ್ವಯ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಪರವಾನಗಿ, ಪರವಾನಗಿ ನವೀಕರಣ, ಹಾಗೂ ಕಬ್ಬು ಮೀಸಲು ಕ್ಷೇತ್ರ ನಿಗಧಿ ಐ.ಇ.ಎಂ ವಿಸ್ತರಣೆ ಮುಂತಾದವುಗಳನ್ನು ನೀಡಲಾಗುತ್ತಿದೆ. ಹಾಗೂ ರೈತರ ಕಬ್ಬು ಬಿಲ್ಲನ್ನು ನಿಗದಿತ ಕಾಲಮಿತಿಯಲ್ಲಿ ಪಾವತಿಸುವಂತೆ ಕಾರ್ಖಾನೆಗಳ ಆಡಳಿತ ಮಂಡಳಿಗಳಿಗೆ ಸೂಚನೆ ನೀಡಲಾಗುತ್ತಿದೆ. ಬೀದರ್ ಜಿಲ್ಲೆಯ 04 ಸಕ್ಕರೆ ಕಾರ್ಖಾನೆಗಳ ಪೈಕಿ 2 ಸಹಕಾರಿ ವಲಯದಲ್ಲಿ ಮತ್ತು 2 ಖಾಸಗಿ ವಲಯದಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಪ್ರತಿ ಕಾರ್ಖಾನೆಗೂ ಅದರದೇ ಆದ ಆಡಳಿತ ಮಂಡಳಿಗಳಿದ್ದು, ದೈನಂದಿನ ಆಡಳಿತಾತ್ಮಕ ಕಾರ್ಯಗಳನ್ನು ಜಾರಿಯಲ್ಲಿರುವ ಅಧಿನಿಯಮ, ನಿಯಮ, ಮತ್ತು ಮಾರ್ಗಸೂಚಿಗಳನ್ವಯ ಕಾರ್ಯನಿರ್ವಹಿಸುತ್ತವೆ. ರಾಜ್ಯ ಸರ್ಕಾರವು ಕಾರ್ಖಾನೆಗಳ ದೈನಂದಿನ ಕಾರ್ಯಚಟುವಟಿಕೆಗಳಲ್ಲಿ ನೇರವಾಗಿ ಹಸ್ತಕ್ಷೇಪ ಮಾಡುವುದಿಲ್ಲ. |
| (ಈ) | ರೈತರಿಗೆ ಟನ್ ಕಬ್ಬಿಗೆ ಎಷ್ಟು ಹಣ ಪಾವತಿಸಲಾಗಿದೆ ಎಷ್ಟು ಪಾವತಿಸಿರುತ್ತಾರೆ; ಇನ್ನುಳಿದ ಬಿಲ್ಲಿನ ಹಣವನ್ನು ಯಾವಾಗ ಪಾವತಿಸಲಾಗುವುದು? | ಬೀದರ್ ಜಿಲ್ಲೆಯ 04 ಕಾರ್ಖಾನೆಗಳಿಗೆ ಪ್ರತಿ ಟನ್ ಒಂದಕ್ಕೆ ನಿಗದಿಪಡಿಸಿರುವ ಎಫ್.ಆರ್.ಪಿ. ದರ, ಅದರಂತೆ ಕಾರ್ಖಾನೆಗಳು ನುರಿಸಿದ ಕಬ್ಬಿಗೆ ಪಾವತಿಸಬೇಕಾದ ಕಬ್ಬು ಬಿಲ್ಲು ಮೊತ್ತ, ಪಾವತಿಸಿದ ಮೊತ್ತ ಮತ್ತು ಬಾಕಿ ಮೊತ್ತದ ವಿವರಗಳು ದಿನಾಂಕ 31.08.2021 ರ ಅಂತ್ಯಕ್ಕೆ ಈ ಕೆಳಕಂಡಂತೆ ಇರುತ್ತದೆ.<br>(ರೂ. ಲಕ್ಷಗಳಲ್ಲಿ) |

| ಕ್ರ. ಸಂ. | ಕಾರ್ಖಾನೆಯ ಹೆಸರು | ನಿಗದಿಪಡಿಸಿದ ಎಫ್.ಆರ್.ಪಿ. ದರ ಪ್ರತಿ ಮೆ. ಟನ್ ಒಂದಕ್ಕೆ (ರೂ.ಗಳಲ್ಲಿ) | ಪಾವತಿಸಬೇಕಾದ ಮೊತ್ತ | ಪಾವತಿಸಿರುವ ಮೊತ್ತ | ಬಾಕಿ ಮೊತ್ತ |
|---|---|---|---|---|---|
| 1 | ಭಾಲ್ಕೇಶ್ವರ ಶುಗರ್ಸ್ ಲಿ., ಬಾಜೋಳಗ, ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ | 2708 | 11419 | 11419 | 0 |

| | | | | | | | |
|---|---|---|---|---|---|---|---|
| | | 2 | ಬೀದರ್ ಕಿಸಾನ್ ಶಕ್ಕರ್ ಕಾರ್ಖಾನಾ ಲಿ., ಮೊಗ್ದಾಲ್ ಗ್ರಾಮ. ಬೀದರ್ ತಾಲ್ಲೂಕು ಮತ್ತು ಜಿಲ್ಲೆ | 2708 | 6012 | 5803 | 209 |
| | | 3 | ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಭಾಲ್ಕಿ ತಾಲ್ಲೂಕು ಬೀದರ್ ಜಿಲ್ಲೆ. | 2708 | 8753 | 8753 | 0 |
| | | 4 | ನಾರಂಜಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಇಮಾಂಪುರ್, ಬೀದರ್ ಜಿಲ್ಲೆ | 2708 | 6844 | 6844 | 0 |
| | | ಬೀದರ್ ಕಿಸಾನ್ ಶಕ್ಕರ್ ಕಾರ್ಖಾನಾ ಲಿ., ಈ ಕಾರ್ಖಾನೆಯು ದಿನಾಂಕ 31.08.2021 ಕ್ಕೆ ಇದ್ದಂತೆ ರೂ.209.00 ಲಕ್ಷಗಳಷ್ಟು ಮೊತ್ತವನ್ನು ಪಾವತಿಸಲು ಬಾಕಿ ಉಳಿಸಿಕೊಂಡಿರುತ್ತದೆ. ಪಾವತಿ ಪ್ರಮಾಣವು ಶೇ.97 ರಷ್ಟು ಆಗಿರುತ್ತದೆ. ಬಾಕಿ ಮೊತ್ತದ ವಸೂಲಾತಿಗಾಗಿ ದಿನಾಂಕ 02.02.2021 ಮತ್ತು 18.06.2021 ರಂದು ಶಾಸನಬದ್ಧ ನೋಟೀಸ್‌ಗಳನ್ನು ಜಾರಿಗೊಳಿಸಲಾಗಿದೆ. ಆದಾಗ್ಯೂ ಕಾರ್ಖಾನೆ ಬಾಕಿ ಮೊತ್ತ ಪಾವತಿಸದೇ ಇದ್ದಲ್ಲಿ, ಕಬ್ಬು (ನಿಯಂತ್ರಣ) ಆದೇಶ, 1966ರ ಅವಕಾಶಗಳನ್ವಯ ವಸೂಲಾತಿಗೆ ಕ್ರಮವಹಿಸಲಾಗುವುದು. | | | | | |

ಸಂಖ್ಯೆ: ಸಿಐ 82 ಸಿಓಎಫ್ 2021

(ಶಂಕರ್.ಬ.ಪಾಟೀಲ ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು.